॥ ಜಗದೋದ್ಧಾರನ ॥

ಜಗದೋದ್ಧಾರನ ಆಡಿಸಿದಳೆಶೋದೆ ॥ ಪ ॥
ಜಗದೋದ್ಧಾರನ ಮಗನೆಂದು ತಿಳಿಯುತ ।
ಸುಗುಣಾಂತರಂಗನ ಆಡಿಸಿದಳೆಶೋದೆ ॥ ಅ ॥

ನಿಗಮಕೆ ಸಿಲುಕದ ಅಗಣಿತ ಮಹಿಮನ ।
ಮಗುಗಳ ಮಾಣಿಕ್ಯನ ಆಡಿಸಿದಳೆಶೋದೆ ॥ ೧ ॥

ಅಣೋರಣಿಯನ ಮಹತೋಮಹಿಮನ ।
ಅಪ್ರಮೇಯನ ಆಡಿಸಿದಳೆಶೋದೆ ॥ ೨ ॥

ಪರಮಪುರುಷನ ಪರವಾಸುದೇವನ ।
ಪುರಂದರವಿಠಲನ ಆಡಿಸಿದಳೆಶೋದೆ ॥ ೩ ॥